ಆದರೆ ಯಾರಾದರೂ ನೋಡಿ ನಕ್ಕರೆ ? ಏ! ಎಂದುಕೊಂಡು ಮು
ರಲ್ಲಿ ವೆಂಕಟೇಶಯ್ಯನವರೂ ರಾಯರೂ ನಿಟ್ಟುಸಿರು ಬಿಟ್ಟಂತೆ ಕೇ
ನನ್ನ ಭ್ರಮೆಯಿರಬಹುದೇ ? ಎಂದುಕೊಂಡೆ. ಅವರ ಮುಖಗಳಲ್ಲಿ ಮತ್ತ
ವಿಶೇಷ ಭಾವಸಂಚಾರದ ಸುಳಿವೂ ಈ ಮುಂಚೆ ಕಾಣುತ್ತಿರಲಿಲ್ಲ. ಆದ
ಮೂವರೂ ಥಟ್ಟನೆ ಪರಸ್ಪರ ಮುಖಗಳನ್ನು ನೋಡಿಕೊಂಡೆವು—ಎಲ್ಲ
ಮುಖಗಳಲ್ಲಿಯೂ ಏಕಮನೋಭಾವದ ಸಂಚಾರವಿತ್ತು. ಸುಮ್ಮನಾದೆವು. ಮೂರ್ತಿ ಕಿಟಕಿಯ ಹೊರಗೆ ತಲೆಹಾಕಿ ಹೊರಗಿನ ದೂರವನ್ನೇ ನೋಡುತ್ತಿದ್ದರು.

'ಪಂಪಾಯಾತ್ರೆ ಮುಗಿಯಿತಪ್ಪ' ಎಂದರು ರಾಯರು.

'ಇನ್ನೊಂದು ಸಲ ನಾವು ಬರುವಹೊತ್ತಿಗೆ ಅಲ್ಲಿನ ಬೆಟ್ಟಗಳೆಲ್ಲ ಉರುಳಿ ಪುಡಿಪುಡಿಯಾಗಿ ಹೋಗಿರುವುವೇನೊ' ಎಂದರು,—ವೆಂಕಟೇಶಯ್ಯನವರು;—ಒಂದು ಚಿಟಿಕೆ—ಚಿಟಿಕೆ ಏನು ಬಂತು ಎರಡರಷ್ಟನ್ನು—ಹಿಡಿದು.

'ನಾಳೆ ಊರು ಸೇರಿಕೊಳ್ಳುವೆವು. ಅಲ್ಲಿ ಯಾವ ಯಾವುದು ಏನೇನು ಗತಿಯಾಗಿ ಹೋಗಿದೆಯೊ ? ಊರುಬಿಟ್ಟು ಆಗಲೆ ಹತ್ತುಹನ್ನೆರಡು ದಿನಗಳಾಗಿ ಹೋಯಿತು' ಎಂದರು, ಯಜಮಾನರು.

ಯಾತ್ರೆ ಮುಗಿಯಿತು.

